## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1767
ಮಾನ್ಯ ಸದಸ್ಯರ ಹೆಸರು : ಶ್ರೀ ವೈ.ಎಂ. ಸತೀಸ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 14.03.2022
ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ವೈದ್ಯಕೀಯ ಶಿಕ್ಷಣ ಸಚಿವರು

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 01. | ಮಾನಸಿಕ ಮತ್ತು ನರರೋಗಕ್ಕೆ ಸಂಬಂಧಿಸಿದ (ನಿಮಾನ್ಸ್ ಆಸ್ಪತ್ರೆ) ವಿಭಾಗದ ವೈದ್ಯಕೀಯ ವಿಷಯಗಳ ಪರಿಣಿತ ವೈದ್ಯರುಗಳನ್ನು ಜಿಲ್ಲಾ ಮಟ್ಟದ ಆಸ್ಪತ್ರೆಗಳಲ್ಲಿ ನಿಯೋಜಿಸಲು ಸರ್ಕಾರ ಕೈಗೊಂಡ ಕ್ರಮಗಳೇನು: (ವಿವರ ನೀಡುವುದು) | ಮಾನಸಿಕ ಮತ್ತು ನರರೋಗಕ್ಕೆ ಸಂಬಂಧಿಸಿದ (ನಿಮಾನ್ಸ್ ಆಸ್ಪತ್ರೆ) ವಿಭಾಗದ ಪರಿಣಿತ ವೈದ್ಯರುಗಳನ್ನು ಜಿಲ್ಲಾ ಮಟ್ಟದ ಆಸ್ಪತ್ರೆಗಳಲ್ಲಿ ನಿಯೋಜಿಸಲಾಗುತ್ತಿಲ್ಲ. ಆದರೆ, ಜಿಲ್ಲಾ ಮಾನಸಿಕ ಆರೋಗ್ಯ ಕಾರ್ಯಕ್ರಮದ ಹಾಗೂ ಎಲ್ಲಾ ಜಿಲ್ಲಾ ಆಸ್ಪತ್ರೆಗಳ ಮನೋ ವೈದ್ಯಕೀಯ ತಂಡಗಳ ಮೂಲಕ ಮನೋ ರೋಗಿಗಳಿಗೆ ಉಚಿತ ಆಪ್ತ ಸಮಾಲೋಚನೆ ಹಾಗೂ ಚಿಕಿತ್ಸೆ ನೀಡಲಾಗುತ್ತದೆ. ಸದರಿ ಕಾರ್ಯಕ್ರಮವನ್ನು ರಾಜ್ಯಾದ್ಯಂತ 30 ಜಿಲ್ಲೆಗಳಲ್ಲಿ ಮತ್ತು ಬಿಬಿಎಂಪಿ ವ್ಯಾಪ್ತಿಯಲ್ಲಿ ಅನುಷ್ಠಾನ ಮಾಡಲಾಗಿದೆ.<br><br>ಮಾನಸಿಕ ಆರೋಗ್ಯ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ "ಮನೋಚೈತನ್ಯ" (Super Tuesday Clinic) ಕಾರ್ಯಕ್ರಮವನ್ನು ರಾಜ್ಯದ ಎಲ್ಲಾ ತಾಲ್ಲೂಕಿನಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಮಾನಸಿಕ ಆರೋಗ್ಯ ಕಾರ್ಯಕ್ರಮದ ಮನೋವೈದ್ಯರ ತಂಡ ಆಯ್ದ ಮಂಗಳವಾರದಂದು ತಾಲ್ಲೂಕು ಆಸ್ಪತ್ರೆಗಳಿಗೆ ಭೇಟಿ ನೀಡಿ ಮನೋರೋಗಿಗಳನ್ನು ಗುರುತಿಸಿ ಚಿಕಿತ್ಸೆ ನೀಡಲಾಗುತ್ತಿದೆ ಹಾಗೂ 104 ಉಚಿತ ಆರೋಗ್ಯ ಸಹಾಯವಾಣಿ ಮೂಲಕ ಆಪ್ತ ಸಮಾಲೋಚನೆಗೆ ಅನುವು ಮಾಡಿ ಕೊಡಲಾಗಿದೆ.<br><br>ನರ ರೋಗಕ್ಕೆ ಸಂಬಂಧಿಸಿದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಯಾವುದೇ ಕಾರ್ಯಕ್ರಮಗಳು ಇರುವುದಿಲ್ಲ. |
| 02. | ಜಿಲ್ಲಾ ಮಟ್ಟದಲ್ಲಿಯೇ ಉತ್ತಮ ಮಾನಸಿಕ ಮತ್ತು ನರರೋಗಕ್ಕೆ ಸಂಬಂಧಿಸಿದ ಚಿಕಿತ್ಸೆಗಳು ದೊರೆಯುವುದರಿಂದ ಕೇಂದ್ರಿಕೃತವಾಗಿರುವ ನಿಮಾನ್ಸ್ ನಂತಹ ಆಸ್ಪತ್ರೆಗಳ ಮೇಲೆ ಒತ್ತಡಗಳು ಕಡಿಮೆಯಾಗಿ ರೋಗಿಗಳಿಗೆ ಜಿಲ್ಲಾ ಮಟ್ಟದಲ್ಲಿಯೇ ಉತ್ತಮ ಚಿಕಿತ್ಸೆ ದೊರೆಯಲು ಅನುಕೂಲವಾಗುವುದರಿಂದ ಈ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳುವುದೇ: | |
| 03. | ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾಸ್ಪತ್ರೆಗಳ ನರರೋಗ ವೈದ್ಯರುಗಳಿಗೆ ನಿಮಾನ್ಸ್‌ನಂತಹ ಅಥವಾ ಇತರೆ ಉತ್ತಮ ನರರೋಗ ಸಂಸ್ಥೆಯ ಮೂಲಕ ಕಾಲಕಾಲಕ್ಕೆ ತರಬೇತಿ ನೀಡಲು ಯಾವುದಾದರೂ ಯೋಜನೆಗಳು ಸರ್ಕಾರದ ಮುಂದೆ ಇವೆಯೇ? (ಮಾಹಿತಿ ನೀಡುವುದು) | |

**ಕಡತ ಸಂಖ್ಯೆ: HFW 122 CORD 2022**

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಮತ್ತು ವೈದ್ಯಕೀಯ ಶಿಕ್ಷಣ ಸಚಿವರು